

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : | 721 |
| ಸದಸ್ಯರ ಹೆಸರು : | ಶ್ರೀಮತಿ ಎಸ್.ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ : | 15-12-2020 |
| ಉತ್ತರಿಸುವವರು : | ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿನ ನಗರ ಸ್ಥಳೀಯ ಸಂಸ್ಥೆಗಳಲ್ಲಿ (ನಗರ ಸಭೆ, ಪುರಸಭೆ, ಪಟ್ಟಣ ಪಂಚಯಿತಿ)ಗಳಲ್ಲಿ ಪ್ರಸ್ತುತ ಇರುವ ನಿವೇಶನ ರಹಿತರು ಹಾಗೂ ವಸತಿರಹಿತರ ಪಟ್ಟಿ ತಯಾರಿಸಲಾಗಿದೆಯೇ: | ಹೌದು.<br>2015-16ನೇ ಸಾಲಿನಲ್ಲಿ ಕೇಂದ್ರ ಪುರಸ್ಕೃತ ಹೌಸಿಂಗ್ ಫಾರ್ ಆಲ್- ಪ್ರಧಾನ ಮಂತ್ರಿ ಆವಾಸ್ ಯೋಜನೆ(ನಗರ)ಯಡಿ ಬೇಡಿಕೆ ಸಮೀಕ್ಷೆ / ಸರ್ವೆ ಕಾರ್ಯ ನಡೆಸಿ ಪಿಎಂಎವೈ-ಎಂಐಎಸ್ ಅನ್‌ಲೈನ್‌ನಲ್ಲಿ ನಿವೇಶನ ರಹಿತರು ಹಾಗೂ ವಸತಿರಹಿತರ ಪಟ್ಟಿಯನ್ನು ತಯಾರಿಸಲಾಗಿರುತ್ತದೆ. |
| ಆ) | ಪಟ್ಟಿ ಹಾಗಿದ್ದಲ್ಲಿ ಈ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಪ್ರಸ್ತುತ ಇರುವ ನಿವೇಶನ ರಹಿತರು ಹಾಗೂ ವಸತಿ ರಹಿರತ ಸಂಖ್ಯೆ ಎಷ್ಟು; | ಕೊಡಗು ಜಿಲ್ಲೆಯ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಪ್ರಸ್ತುತ ಇರುವ ನಿವೇಶನ ರಹಿತರು ಹಾಗೂ ವಸತಿರಹಿತರ ಪಟ್ಟಿ. |

| ಕ್ರ. ಸಂ | ನಗರ ಸ್ಥಳೀಯ ಸಂಸ್ಥೆ ಹೆಸರು | ನಿವೇಶನ ರಹಿತರ ಸಂಖ್ಯೆ | ವಸತಿ ರಹಿರತರ ಸಂಖ್ಯೆ | ಒಟ್ಟು |
|---|---|---|---|---|
| 1 | ನಗರ ಸಭೆ, ಮಡಿಕೇರಿ | 1680 | 154 | 1834 |
| 2. | ಪಟ್ಟಣ ಪಂಚಾಯಿತಿ, ವಿರಾಜಪೇಟೆ | 493 | 183 | 676 |
| 3. | ಪಟ್ಟಣ ಪಂಚಾಯಿತಿ, ಕುಶಾಲನಗರ | 610 | 14 | 624 |
| 4. | ಪಟ್ಟಣ ಪಂಚಾಯಿತಿ, ಸೋಮವಾರಪೇಟೆ | 337 | 15 | 352 |
| | ಒಟ್ಟು | 3120 | 366 | 3486 |

---2

| | | |
|---|---|---|
| ಇ) | ಸದರಿ ನಿವೇಶನ ರಹಿತರು ಹಾಗೂ ವಸತಿರಹಿತರಿಗೆ ನಿವೇಶನ ಮತ್ತು ವಸತಿ ಒದಗಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು: | ನಿವೇಶನ ರಹಿತರು ಹಾಗೂ ವಸತಿರಹಿತರಿಗೆ ನಿವೇಶನ ಮತ್ತು ವಸತಿ ಒದಗಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳ ಕುರಿತು ಈ ಕೆಳಕಂಡಂತಿದೆ.<br>• ಮಡಿಕೇರಿ ನಗರಸಭೆಯಲ್ಲಿ ಒಟ್ಟು 1834 ವಸತಿ ಹಾಗೂ ನಿವೇಶನ ರಹಿತರಿದ್ದು, ಸದರಿಯವರಿಗೆ ವಸತಿ ಸೌಲಭ್ಯ ಕಲ್ಪಿಸಲು ಸೂಕ್ತ ಪೈಸಾರಿ ಜಾಗ ಗುರುತಿಸಿಕೊಡುವಂತೆ ತಹಶೀಲ್ದಾರ್‌ರವರು ಮಡಿಕೇರಿ ರವರನ್ನು ಕೋರಲಾಗಿರುತ್ತದೆ. ಹಾಗೂ ಈ ಬಗ್ಗೆ ದಿನಾಂಕ:02.11.2020 ರಂದು ಉಪವಿಭಾಗಾಧಿಕಾರಿಗಳಲ್ಲಿ ಚರ್ಚಿಸಲಾಗಿದ್ದು, ಮಡಿಕೇರಿ ನಗರ ಸಭೆ ವ್ಯಾಪ್ತಿಯ ನಿವೇಶನ ಮತ್ತು ವಸತಿ ರಹಿತರಿಗೆ ಬಹುಮಹಡಿ ವಸತಿ ಸೌಲಭ್ಯವನ್ನು ಮಡಿಕೇರಿಯಿಂದ 15 ಕಿ.ಮೀ ವ್ಯಾಪ್ತಿಯೊಳಗೆ ಕಲ್ಪಿಸಲು ಫಲಾನುಭವಿಗಳಿಂದ ಅಭಿಪ್ರಾಯ ಪಡೆಯಲು ತಿಳಿಸಿರುತ್ತಾರೆ. ಫಲಾನುಭವಿಗಳಿಂದ ಈ ಬಗ್ಗೆ ಅಭಿಪ್ರಾಯವನ್ನು ಪಡೆಯಲಾಗುತ್ತಿರುತ್ತದೆ.<br>• ವಿರಾಜಪೇಟೆ ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು 676 ವಸತಿ ಹಾಗೂ ನಿವೇಶನ ರಹಿತರಿದ್ದು, ಸದರಿಯವರಿಗೆ ವಸತಿ ಸೌಲಭ್ಯ ಕಲ್ಪಿಸಲು ಸರ್ಕಾರಿ ಜಾಗ ಲಭ್ಯವಿಲ್ಲದೇ ಇರುವುದರಿಂದ ವಿರಾಜಪೇಟೆ ಪಟ್ಟಣಕ್ಕೆ ಹತ್ತಿರ ಇರುವ ಐಮಂಗಲ ಗ್ರಾಮದ ಸರ್ವೆ ಸಂ:21/2ರಲ್ಲಿ 3.85 ಎಕ್ರೆ 21/3ರಲ್ಲಿ 1.05 ಎಕ್ರೆ ಹಾಗೂ 22/3ರಲ್ಲಿ 0.13 ಎಕರೆ ಹಾಗೂ ಅಂಬಟ್ಟಿ ಗ್ರಾಮದ ಸರ್ವೆನಂ.33ರಲ್ಲಿ 7.8 ಎಕರೆ ಕುಕ್ಲೂರುಗ್ರಾಮದ ಸರ್ವೆ ನಂ 224ರಲ್ಲಿ 9 ಎಕರೆ, ಬಾಳುಗೂಡು ಗ್ರಾಮ ಸರ್ವೆ ನಂ.61/2, 160/4, 159/3, 150/3, 161/3, ರಲ್ಲಿ 5 ಎಕರೆ ಖಾಸಗಿ ಜಾಗವನ್ನು ಗುರುತಿಸಿದ್ದು, ಸ್ಥಳೀಯ ಸಂಸ್ಥೆಯ ತಾಂತ್ರಿಕ ವರದಿಯೊಂದಿಗೆ ಸೂಕ್ತ ಜಾಗವನ್ನು ಪಟ್ಟಣ ಪಂಚಾಯಿತಿಗೆ ಹಸ್ತಾಂತರಿಸುವ ಪ್ರಕ್ರಿಯೆಯನ್ನು ಕೈಗೊಳ್ಳುವಂತೆ ಕೋರಿ ಉಪವಿಭಾಗಾಧಿಕಾರಿ, ಮಡಿಕೇರಿ ಉಪವಿಭಾಗ ಕೊಡಗು ಜಿಲ್ಲೆ, ಇವರ ಕಛೇರಿಗೆ ತಹಶೀಲ್ದಾರ್ ವಿರಾಜಪೇಟೆ ತಾಲ್ಲುಕು ವಿರಾಜಪೇಟೆ ರವರ ಮೂಲಕ ಪ್ರಸ್ತಾವನೆ ಸಲ್ಲಿಸಲಾಗಿದೆ.<br>• ಕುಶಾಲನಗರ ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು 624 ವಸತಿ ಹಾಗೂ ನಿವೇಶನ ರಹಿತರಿದ್ದು, ಇದರಲ್ಲಿ ಪ್ರಸ್ತುತ ಆಯ್ಕೆ ಮಾಡಲಾಗಿರುವ 144 ಫಲಾನುಭವಿಗಳಿಗೆ ವಸತಿ ಸೌಲಭ್ಯ ಕಲ್ಪಿಸಲು ಪಟ್ಟಣ ಪಂಚಾಯಿತಿಯ ಗುಂಡೂರಾವ್ ಬಡಾವಣೆಯ ಸರ್ವೆ ನಂ.17 ರ ಒಟ್ಟು 6 ಎಕರೆ 19 ಸೆಂಟು ಜಾಗದಲ್ಲಿ ರೂ.768 ಲಕ್ಷಗಳಲ್ಲಿ ಜಿ+2 ಮಾದರಿಯಲ್ಲಿ ಗುಂಪು ಮನೆ(ಎಹೆಚ್‌ಪಿ ಯೋಜನೆ) ನಿರ್ಮಿಸಲು ಬಡಾವಣೆಯ ಟೋಟಲ್ ಸ್ಟೇಷನ್ ಸರ್ವೆ ಕಾರ್ಯ ಪೂರ್ಣಗೊಳಿಸಿ, ಡಿ.ಪಿ.ಆರ್ ತಯಾರಿಲಾಗಿರುತ್ತದೆ. ಆದರೆ ಸ್ಥಳೀಯ ಸಾರ್ವಜನಿಕರ ಆಕ್ಷೇಪಣೆಯಿಂದಾಗಿ ಮುಂದಿನ ಪ್ರಗತಿಯು ತಾತ್ಕಾಲಿಕವಾಗಿ ಸ್ಥಗಿತಗೊಂಡಿರುತ್ತದೆ.<br>• ಸೋಮವಾರಪೇಟೆ ಪಟ್ಟಣ ಪಂಚಾಯಿತಿಯಲ್ಲಿ ಒಟ್ಟು 352 ವಸತಿ ಹಾಗೂ ನಿವೇಶನ ರಹಿತರಿದ್ದು, ಸದರಿಯವರಿಗೆ ವಸತಿ ಸೌಲಭ್ಯ ಕಲ್ಪಿಸಲು ಸೂಕ್ತ ಪೈಸಾರಿ ಜಾಗ ಗುರುತಿಸಿಕೊಡುವಂತೆ ತಹಶೀಲ್ದಾರ್, ಸೋಮವಾರಪೇಟೆ |

| | | |
|---|---|---|
| | | ತಾಲ್ಲೂಕು, [illegible] ರವರನ್ನು ಕೋರಲಾಗಿದ್ದು, ಯಾವುದೇ ಜಾಗ ಲಭ್ಯವಿರುವುದಿಲ್ಲ ಎಂದು ತಿಳಿಸಿರುತ್ತಾರೆ ಹಾಗೂ ಖಾಸಗಿ ಜಾಗ ಖರೀದಿಸುವ ಬಗ್ಗೆ ಈಗಾಗಲೇ ಪತ್ರಿಕಾ ಪ್ರಕಟಣೆ ನೀಡಿದ್ದು, ಖಾಸಗಿ ಜಾಗದ ದರವು ಸರ್ಕಾರವು ನಿಗಧಿ ಪಡಿಸಿದ ದರಕ್ಕಿಂತ ಅಧಿಕವಾಗಿರುತ್ತದೆ. ಆದುದರಿಂದ ಈ ಬಗ್ಗೆ ಆರ್.ಜಿ.ಆರ್.ಹೆಚ್.ಸಿ.ಎಲ್. ನಿಗಮಕ್ಕೆ ಪತ್ರ ಬರೆಯಲಾಗಿದೆ. |
| ಈ) | ಯಾವ ಕಾಲಮಿತಿಯೊಳಗೆ ಈ ಎಲ್ಲಾ ನಿವೇಶನ ರಹಿತರು ಹಾಗೂ ವಸತಿರಹಿತರಿಗೆ ನಿವೇಶನ ಮತ್ತು ವಸತಿ ಒದಗಿಸಲಾಗುವುದು? | ಸಂಬಂಧಪಟ್ಟ ಕಂದಾಯ ಇಲಾಖೆ ವತಿಯಿಂದ ಸೂಕ್ತ ಸರ್ಕಾರಿ ಜಾಗವನ್ನು ಗುರುತಿಸಿಕೊಟ್ಟ ನಂತರ ಹಾಗೂ ರಾಜ್ಯ ಸರ್ಕಾರದಿಂದ ಈಗಾಗಲೇ ಕಳೆದ 2 ವರ್ಷಗಳಿಂದ ವಿವಿಧ ನಗರ ವಸತಿ ಯೋಜನೆಗಳಡಿ ತಡೆಹಿಡಿಯಲಾಗಿರುವ ಗುರಿಗಳನ್ನು ಹಾಗೂ ಮುಂದಿನ ವರ್ಷಗಳ ಸಾಲಿನಲ್ಲಿ ಹೆಚ್ಚಿನ ಸಂಖ್ಯೆಯ ಗುರಿಗಳನ್ನು ನಿಗಧಿಪಡಿಸಿ ಅರ್ಹ ಫಲಾನುಭವಿಗಳಿಗೆ ವಸತಿ ಸೌಲಭ್ಯ ಕಲ್ಪಿಸಲು ಕ್ರಮವಹಿಸಲಾಗುವುದು. |

ಸಂಖ್ಯೆ: ನಅಇ 149 ಜಿಇಎಲ್ 2020(ಇ)

(ಡಾ|| ನಾರಾಯಣ ಗೌಡ)
ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು